# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜುಲೈ ೨೩, ೨೦೧೫ (ಶ್ರಾವಣ ೧, ಶಕ ವರ್ಷ ೧೯೩೭)<br>Bangalore, Thursday, July 23, 2015 (Shravana 1, Shaka Varsha 1937) | ಸಂಚಿಕೆ ೩೦<br>Issue 30 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ತಾಲ್ಲೂಕು ಕಛೇರಿಗಳನ್ನು ತೆರೆಯಲು ಹಾಗೂ ಪೂರಕ ಹುದ್ದೆಗಳನ್ನು ಭರ್ತಿ ಮಾಡಲು ಆಡಳಿತ ವ್ಯವಸ್ಥೆಯನ್ನು ಸಮಗ್ರವಾಗಿ ಪುನರ್ ರಚಿಸುವ ಕುರಿತು.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013.

2) ಸರ್ಕಾರದ ಆದೇಶ ಸಂಖ್ಯೆ ಹಿಂವಕ 104 ಬಿಸಿಎ 2013, ದಿನಾಂಕ:13.11.2013

3) ಸರ್ಕಾರದ ಆದೇಶ ಸಂಖ್ಯೆ:ಹಿಂವಕ 407 ಬಿಇಟಿ 2013, ದಿನಾಂಕ:01.03.2014.

4) ಸರ್ಕಾರದ ಪತ್ರ ಸಂಖ್ಯೆ:ಹಿಂವಕ 412 ಬಿಇಟಿ 2013, ದಿನಾಂಕ:07.08.2014.

5) ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ಹಿಂವಕನಿ: ಸಿಬ್ಬಂದಿ-3: ಸಿಆರ್-28: 2014-15, ದಿನಾಂಕ:05.09.2014.

6) ಸರ್ಕಾರದ ಇದೇ ಸಮಸಂಖ್ಯೆಯ ಆದೇಶ ದಿನಾಂಕ:25.05.2015

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ತಾಲ್ಲೂಕು ಮಟ್ಟದ ಕಛೇರಿಗಳನ್ನು ತೆರೆಯಲು ಮತ್ತು ಆಡಳಿತ ವ್ಯವಸ್ಥೆಯನ್ನು ಸಮಗ್ರವಾಗಿ ಪುನರ್ ರಚಿಸಲು ಪೂರಕವಾಗಿ ಹಾಲಿ ಇರುವ ವಿವಿಧ ವೃಂದಗಳಲ್ಲಿ ಹೆಚ್ಚುವರಿ ಹುದ್ದೆಗಳನ್ನು ಹಾಗೂ ಕೆಲವು ಗ್ರೂಪ್-ಎ, ಗ್ರೂಪ್-ಬಿ ಮತ್ತು ಗ್ರೂಪ್-ಸಿ ಹೊಸ ವೃಂದದ ಹುದ್ದೆಗಳನ್ನು ಸೃಜಿಸಲಾಗಿದೆ. ಅಲ್ಲದೆ ಇದೇ ಆದೇಶದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಡಿ.ದೇವರಾಜ ಅರಸು ಸಂಶೋಧನಾ ಸಂಸ್ಥೆ ಮತ್ತು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗಕ್ಕೆ ಈ ಹಿಂದೆ ಮಂಜೂರಾಗಿದ್ದ ಕೆಲವು ವೃಂದದ ಹುದ್ದೆಗಳನ್ನು ಪರಿವರ್ತನೆ ಮಾಡಿ ಆದೇಶಿಸಲಾಗಿದೆ. ಈ ಆದೇಶದಲ್ಲಿ ಗ್ರೂಪ್-ಎ ವೃಂದದ 11, ಗ್ರೂಪ್-ಬಿ ವೃಂದದ 21, ಗ್ರೂಪ್-ಸಿ ವೃಂದದ 693 ಹಾಗೂ ಗ್ರೂಪ್-ಡಿ ವೃಂದದ 1567, ಒಟ್ಟು 2485 ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ದೇವರಾಜ ಅರಸು ಸಂಶೋಧನಾ ಸಂಸ್ಥೆಗೆ, ಒಂದು ಗ್ರಂಥಪಾಲಕರ ಹುದ್ದೆ ಹಾಗೂ ಸಂಶೋಧನಾ ಸಹಾಯಕರ 2 ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಆದೇಶದಲ್ಲಿ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಹಾಜರಾಗುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಪರೀಕ್ಷಾ ಪೂರ್ವ ತರಬೇತಿ ನೀಡುವುದಕ್ಕಾಗಿ ಬೆಂಗಳೂರು, ಮೈಸೂರು, ಬೆಳಗಾವಿ ಮತ್ತು ಕಲಬುರಗಿ ವಿಭಾಗೀಯ ಜಿಲ್ಲಾ ಕೇಂದ್ರ ಸ್ಥಾನಗಳಲ್ಲಿ 04 ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳನ್ನು ತೆರೆಯಲು ಸರ್ಕಾರವು ಅನುಮೋದನೆ ನೀಡಿ ಆದೇಶಿಸಿರುತ್ತದೆ.

ಹೊಸದಾಗಿ ಸೃಜಿಸಲಾದ ಹುದ್ದೆಗಳಲ್ಲಿ ಗ್ರೂಪ್-ಎ ವೃಂದದ ಹುದ್ದೆಗಳನ್ನು ಭರ್ತಿ ಮಾಡುವ ಮತ್ತು ಹೊಸದಾಗಿ ಸೃಜಿಸಲಾಗಿರುವ ಎಲ್ಲಾ ಹುದ್ದೆಗಳ ಅಗತ್ಯತೆ ಬಗ್ಗೆ ಮರು ಪರಿಶೀಲಿಸುವಂತೆ ಸೂಚನೆ ನೀಡಿದ್ದರ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ದಿನಾಂಕ:7.8.2014 ರ ಪತ್ರದಲ್ಲಿ, ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಂದ ಹುದ್ದೆಗಳ ಸೃಜನೆ ಸಂಬಂಧ ಸೂಕ್ತ ಸಮರ್ಥನೆಯೊಂದಿಗೆ ವರದಿ ಸಲ್ಲಿಸುವಂತೆ ಕೋರಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ, ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಕೂಲಂಕಷವಾಗಿ ಪರಿಶೀಲಿಸಿ, ವರದಿಯನ್ನು ನೀಡಿರುತ್ತಾರೆ.

ಈ ಕುರಿತು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ದಿನಾಂಕ:05.9.2014 ರಲ್ಲಿ ನೀಡಲಾದ ಸಮರ್ಥನೆಯೊಂದಿಗೆ ದಿನಾಂಕ:30.09.2013 ರಲ್ಲಿ ಗ್ರೂಪ್-ಎ, ಗ್ರೂಪ್-ಬಿ, ಗ್ರೂಪ್-ಸಿ ಮತ್ತು ಗ್ರೂಪ್-ಡಿ ವೃಂದದಲ್ಲಿ ಸೃಜಿಸಲಾದ ವಿವಿಧ ಹುದ್ದೆಗಳ ಅಗತ್ಯತೆ ಬಗ್ಗೆ

ಸಮಗ್ರವಾಗಿ ಮರುಪರಿಶೀಲನೆ ಮಾಡಿ ವರದಿ ಸಲ್ಲಿಸಿರುತ್ತಾರೆ. ಸದರಿ ಆದೇಶದಲ್ಲಿ ಸೃಜಿಸಲಾಗಿದ್ದ ಕೆಲವೊಂದು ವೃಂದದ ಹುದ್ದೆಗಳು ಸಧ್ಯದಲ್ಲಿ ಅಗತ್ಯವಾಗಿರುವುದಿಲ್ಲವೆಂದು ಪರಿಗಣಿಸಿ ಅವುಗಳ ಸೃಜನೆಯನ್ನು ಹಾಗೂ ಕೆಲವೊಂದು ಹುದ್ದೆಗಳ ಪರಿವರ್ತನೆ ಮಾಡಿರುವುದನ್ನು ಕೈಬಿಟ್ಟು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ತಾಲ್ಲೂಕು ಕಛೇರಿಗಳನ್ನು ಸ್ಥಾಪಿಸಲು ಮತ್ತು ಇಲಾಖೆಯ ಆಡಳಿತ ವ್ಯವಸ್ಥೆಯನ್ನು ಸಮಗ್ರವಾಗಿ ಪುನರ್ ರಚಿಸುವುದಕ್ಕೆ ಹಾಗೂ 04 ವಿಭಾಗೀಯ ಜಿಲ್ಲಾ ಕೇಂದ್ರಗಳಲ್ಲಿ ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳನ್ನು ತೆರೆಯುವುದಕ್ಕೆ ದಿನಾಂಕ:30.09.2013 ರ ಆದೇಶವನ್ನು ಮಾರ್ಪಡಿಸಿ ಆದೇಶ ಹೊರಡಿಸುವುದು ಅಗತ್ಯವಿದ್ದಿತ್ತು. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ಹೊರಡಿಸಲಾದ ಆದೇಶಕ್ಕೆ ತಿದ್ದುಪಡಿಗಳು ಅಗತ್ಯವಿದ್ದುದರಿಂದ ಸದರಿ ಆದೇಶವನ್ನು ಹಿಂಪಡೆಯಲು ನಿರ್ಧರಿಸಿದ್ದು, ಅದರಂತೆ ಹೊಸದಾಗಿ ಮಾರ್ಪಾಡು ಆದೇಶವನ್ನು ಈ ಕೆಳಗಿನಂತೆ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 412 ಬಿಇಟಿ 2013, ಬೆಂಗಳೂರು ದಿನಾಂಕ:27.05.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಹಿಂವಕ 354 ಬಿಇಟಿ 2013, ದಿನಾಂಕ:30.09.2013 ರ ಆದೇಶವನ್ನು ಮಾರ್ಪಡಿಸಿ ಹೊರಡಿಸಲಾಗಿದ್ದ ಇದೇ ಸಮಸಂಖ್ಯೆಯ ದಿನಾಂಕ:25.05.2015 ರ ಆದೇಶವನ್ನು ತಕ್ಷಣದಿಂದ ಅನ್ವಯಿಸುವಂತೆ ಹಿಂಪಡೆದು, ಬದಲಿಗೆ ಈ ಕೆಳಕಾಣಿಸಿದಂತೆ ವಿವಿಧ ವೃಂದದ ಹುದ್ದೆಗಳನ್ನು ಸೃಜಿಸಿ ಹೊಸದಾಗಿ ಆದೇಶ ಹೊರಡಿಸಲಾಗಿದೆ.

| ಕ್ರಮ ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|
| 1 | ಉಪ ನಿರ್ದೇಶಕರು(ಸಂಗ್ರಹಣೆ)<br>(36300-53850) | 01 |
| 2 | ಮುಖ್ಯ ಲೆಕ್ಕಾಧಿಕಾರಿ<br>(36300-53850) | 01 |
| 3 | ಪ್ರಾಂಶುಪಾಲರು<br>(28100-50100) | 04 |
| 4 | ಸೀನಿಯರ್ ಪ್ರೋಗ್ರಾಮರ್<br>(28100-50100) | 01 |
| 5 | ಜೂನಿಯರ್ ಪ್ರೋಗ್ರಾಮರ್<br>(22800-43200) | 01 |
| 6 | ಸಹಾಯಕ ನಿರ್ದೇಶಕರು<br>(ಯೋಜನೆ ಮತ್ತು ಸಾಂಖ್ಯಿಕ)<br>(22800-43200) | 01 |
| 7 | ಪತ್ರಾಂಕಿತ ವ್ಯವಸ್ಥಾಪಕರು<br>(22800-43200) | 33 |
| 8 | ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ<br>(22800-43200) | 177 |
| 9 | ಲೆಕ್ಕ ಅಧೀಕ್ಷಕರು<br>(21600-40050) | 31 |
| 10 | ಕಛೇರಿ ಮೇಲ್ವಿಚಾರಕರು<br>(20000-36300) | 03 |
| 11 | ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ<br>(20000-36300) | 03 |
| 12 | ಕಿರಿಯ ಇಂಜಿನಿಯರ್ (ಸಿವಿಲ್)<br>(17650-32000) | 04 |
| 13 | ಪ್ರಥಮ ದರ್ಜೆ ಸಹಾಯಕರು<br>(14550-26700) | 217 |
| 14 | ಪ್ರಥಮ ದರ್ಜೆ ಸಹಾಯಕರು (ಲೆಕ್ಕಪತ್ರ)<br>(14550-26700) | 01 |
| 15 | ಸಾಂಖ್ಯಿಕ ನಿರೀಕ್ಷಕರು<br>(14550-26700) | 02 |

| | | |
|---|---|---|
| 16 | ಡೇಟಾಎಂಟ್ರಿ ಆಪರೇಟರ್ (ಗ್ರೇಡ್-2) (11600-21000) | 177 |
| 17 | ದ್ವಿತೀಯ ದರ್ಜೆ ಸಹಾಯಕರು (11600-21000) | 207 |
| 18 | ದ್ವಿತೀಯ ದರ್ಜೆ ಸಹಾಯಕರು (ಲೆಕ್ಕಪತ್ರ) (11600-21000) | 02 |
| | **ಒಟ್ಟು** | **866** |

(1) ಕ್ರಮ ಸಂಖ್ಯೆ: 2, 9, 14 ಹಾಗೂ 18 ರಲ್ಲಿನ ಹುದ್ದೆಗಳನ್ನು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ, ಕ್ರಮ ಸಂಖ್ಯೆ:4 ಮತ್ತು 5 ರಲ್ಲಿನ ಹುದ್ದೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ) ದಿಂದ, ಕ್ರಮ ಸಂಖ್ಯೆ:6 ಹಾಗೂ 15 ರಲ್ಲಿನ ಹುದ್ದೆಗಳನ್ನು ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡತಕ್ಕದ್ದು.

2) ಕ್ರಮ ಸಂಖ್ಯೆ:16 ರಲ್ಲಿನ ಹುದ್ದೆಯ ಸೇವೆಯನ್ನು ಹೊರಸಂಪನ್ಮೂಲ ಏಜೆನ್ಸಿಯಿಂದ ಗುತ್ತಿಗೆ ಆಧಾರದ ಮೇಲೆ ಪಡೆಯತಕ್ಕದ್ದು.

3) ಕ್ರಮ ಸಂಖ್ಯೆ:1 ರಿಂದ 18 ರ ವರೆಗಿನ ಹುದ್ದೆಗಳನ್ನು ಕೆಳಕಾಣಿಸಿದ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಸಚಿವಾಲಯದ ಅಡಿ ಬರುವ ಹಾಲಿ ಕಛೇರಿಗಳು ಹಾಗೂ ಹೊಸದಾಗಿ ಸ್ಥಾಪಿಸಲಾಗುವ ತಾಲ್ಲೂಕು ಕಛೇರಿಗಳಿಗೆ ಸೃಜಿಸಿ ಆದೇಶಿಸಿದ್ದು, ಕಛೇರಿವಾರು ಹುದ್ದೆಗಳ ವಿವರಗಳನ್ನು ಈ ಆದೇಶದ ಅನುಬಂಧ-1, ಅನುಬಂಧ-2 ಮತ್ತು ಅನುಬಂಧ-3 ರಲ್ಲಿ ತೋರಿಸಲಾಗಿದೆ.

| ಅನುಬಂಧ | ಹಾಲಿ/ಹೊಸದಾಗಿ ಸ್ಥಾಪಿಸಬೇಕಾಗಿರುವ ಕಛೇರಿ/ಸಂಸ್ಥೆಗಳಿಗೆ | ಒಟ್ಟು ಹುದ್ದೆಗಳು |
|---|---|---|
| 1 | ಆಯುಕ್ತರ ಕಛೇರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು | 30 |
| 2 | ವಿಭಾಗೀಯ/ಜಿಲ್ಲಾ ಕೇಂದ್ರಗಳಲ್ಲಿ ಹೊಸದಾಗಿ ಸ್ಥಾಪಿಸಬೇಕಾಗಿರುವ 04 ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳು ಮತ್ತು ರಾಜ್ಯದ ಎಲ್ಲಾ 30 ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಛೇರಿಗಳು | 128 |
| 3 | ರಾಜ್ಯದ ಎಲ್ಲಾ 177 ತಾಲ್ಲೂಕುಗಳಲ್ಲಿ ಹೊಸದಾಗಿ ಸ್ಥಾಪಿಸಬೇಕಾಗಿರುವ ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಛೇರಿಗಳು | 708 |
| | **ಒಟ್ಟು** | **866** |

4) ಕ್ರಮ ಸಂಖ್ಯೆ 13 ಮತ್ತು 17 ರಲ್ಲಿನ 217 ಪ್ರಥಮ ದರ್ಜೆ ಸಹಾಯಕರು ಹಾಗೂ 207 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಮಾತ್ರ ಹಾಲಿ ಚಾಲ್ತಿಯಲ್ಲಿರುವ ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಹಂತ ಹಂತವಾಗಿ ಭರ್ತಿ ಮಾಡಿಕೊಳ್ಳಲು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಕೆಳಕಾಣಿಸಿದಂತೆ ಅನುಮತಿ ನೀಡಿ ಆದೇಶಿಸಿದೆ.

| ಕ್ರ ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | 2015-16 | 2016-17 |
|---|---|---|---|---|
| 1 | ಪ್ರಥಮ ದರ್ಜೆ ಸಹಾಯಕರು | 217 | 109 | 108 |
| 2 | ದ್ವಿತೀಯ ದರ್ಜೆ ಸಹಾಯಕರು | 207 | 103 | 104 |
| | **ಒಟ್ಟು** | **424** | **212** | **212** |

2015-16 ಮತ್ತು 2016-17 ನೇ ಸಾಲಿನಲ್ಲಿ ಭರ್ತಿ ಮಾಡಿಕೊಳ್ಳಬೇಕಾದ ಪ್ರಥಮ ದರ್ಜೆ ಸಹಾಯಕರು / ದ್ವಿತೀಯ ದರ್ಜೆ ಸಹಾಯಕರ ವಿವರವನ್ನು ಅನುಬಂಧ-4 ಮತ್ತು ಅನುಬಂಧ-5 ರಲ್ಲಿ ತೋರಿಸಿದೆ.

5) ಈ ಆದೇಶದಲ್ಲಿ ಸೃಜಿಸಲಾದ ಹೊಸ ವೃಂದದ ಹುದ್ದೆಗಳನ್ನು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿಕೊಂಡು ನಂತರ ಭರ್ತಿ ಮಾಡಿಕೊಳ್ಳುವುದಕ್ಕೆ ಅನುಮತಿಗಾಗಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು.

6) ಇಲಾಖಾ ಆಯುಕ್ತಾಲಯಕ್ಕೆ ಸೃಜಿಸಲಾದ ಸಿಬ್ಬಂದಿಗೆ ವೇತನಕ್ಕೆ ತಗಲುವ ವೆಚ್ಚವನ್ನು ರಾಜ್ಯವಲಯ ಯೋಜನೇತರ ಲೆಕ್ಕ ಶೀರ್ಷಿಕೆ 2225-03-001-0-01 ರಡಿ, 04 ವಿಭಾಗೀಯ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿಸಲಾಗುವ ಪರೀಕ್ಷಾ ಪೂರ್ವ ತರಬೇತಿ ಕೇಂದ್ರಕ್ಕೆ ಸೃಜಿಸಲಾದ ಸಿಬ್ಬಂದಿ ವೆಚ್ಚವನ್ನು ರಾಜ್ಯ ವಲಯ ಯೋಜನೆ ಲೆಕ್ಕ ಶೀರ್ಷಿಕೆ 2225-03-277-2-37 ರ ಅಡಿ, ಜಿಲ್ಲಾ ಹಿಂದುಳಿದ ವರ್ಗಗಳ ಕಛೇರಿಗಳಿಗೆ ಸೃಜಿಸಲಾದ ಸಿಬ್ಬಂದಿ ವೇತನಕ್ಕೆ ತಗಲುವ ವೆಚ್ಚವನ್ನು ಜಿಲ್ಲಾ ವಲಯ ಯೋಜನೆ ಮತ್ತು ಯೋಜನೇತರ ಲೆಕ್ಕ ಶೀರ್ಷಿಕೆ 2225-00-103-0-39 ರ ಅಡಿ ಹಾಗೂ ಹೊಸದಾಗಿ ಸ್ಥಾಪಿಸಲಾಗುವ ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಛೇರಿಗಳಿಗೆ ಸೃಜಿಸಲಾದ ಸಿಬ್ಬಂದಿ ವೇತನಕ್ಕೆ ತಗಲುವ ವೆಚ್ಚವನ್ನು ರಾಜ್ಯ ವಲಯ ಯೋಜನೆ ಲೆಕ್ಕ ಶೀರ್ಷಿಕೆ 2225-03-277-3-11 ಹಾಗೂ ಜಿಲ್ಲಾ ವಲಯ ಯೋಜನೆ/ ಯೋಜನೇತರ ಲೆಕ್ಕಶೀರ್ಷಿಕೆ 2225-00-103-0-74ರ ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 744 ವೆಚ್ಚ-3 2014, ದಿನಾಂಕ:11.05.2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಎನ್.ಆರ್.ಏರೆಕುಪ್ಪಿ
ಸರ್ಕಾರದ ಅಧೀನ ಕಾರ್ಯದರ್ಶಿ-1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 412 ಬಿಇಟಿ 2013, ದಿನಾಂಕ:27.05.2015 ಕ್ಕೆ ಅನುಬಂಧ-1**

| ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯುಕ್ತರ ಕಛೇರಿಗೆ ಸೃಜಿಸಲಾದ ಹುದ್ದೆಗಳು | | |
|---|---|---|
| **ಕ್ರಮ ಸಂ.** | **ಹುದ್ದೆ ಮತ್ತು ವೇತನ ಶ್ರೇಣಿ** | **ಹುದ್ದೆಗಳ ಸಂಖ್ಯೆ** |
| 1 | ಉಪ ನಿರ್ದೇಶಕರು (ಸಂಗ್ರಹಣೆ) (36300-53850) | 01 |
| 2 | ಮುಖ್ಯ ಲೆಕ್ಕಾಧಿಕಾರಿ (36300-53850) | 01 |
| 3 | ಸೀನಿಯರ್ ಪ್ರೋಗ್ರಾಮರ್ (28100-50100) | 01 |
| 4 | ಜೂನಿಯರ್ ಪ್ರೋಗ್ರಾಮರ್ (22800-43200) | 01 |
| 5 | ಸಹಾಯಕ ನಿರ್ದೇಶಕರು (ಯೋಜನೆ ಮತ್ತು ಸಾಂಖ್ಯಿಕ) (22800-43200) | 01 |
| 6 | ಪತ್ರಾಂಕಿತ ವ್ಯವಸ್ಥಾಪಕರು (22800-43200) | 03 |
| 7 | ಲೆಕ್ಕ ಅಧೀಕ್ಷಕರು (21600-40050) | 01 |
| 8 | ಕಛೇರಿ ಮೇಲ್ವಿಚಾರಕರು (20000-36300) | 03 |
| 9 | ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ (20000-36300) | 03 |
| 10 | ಕಿರಿಯ ಇಂಜಿನಿಯರ್ (ಸಿವಿಲ್) (17650-32000) | 04 |
| 11 | ಪ್ರಥಮ ದರ್ಜೆ ಸಹಾಯಕರು (ಲೆಕ್ಕಪತ್ರ) (14550-26700) | 01 |
| 12 | ಸಾಂಖ್ಯಿಕ ನಿರೀಕ್ಷಕರು (14550-26700) | 02 |
| 13 | ಪ್ರಥಮ ದರ್ಜೆ ಸಹಾಯಕರು (14550-26700) | 06 |
| 14 | ದ್ವಿತೀಯ ದರ್ಜೆ ಸಹಾಯಕರು (ಲೆಕ್ಕಪತ್ರ) (11600-21000) | 02 |
| | **ಒಟ್ಟು** | **30** |

(ಎನ್.ಆರ್.ಎರೆಕುಪ್ಪಿ)
ಸರ್ಕಾರದ ಅಧೀನ ಕಾರ್ಯದರ್ಶಿ-1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 412 ಬಿಇಟಿ 2013, ದಿನಾಂಕ:27.05.2015 ಕ್ಕೆ ಅನುಬಂಧ-2**

| **ಅ)ವಿಭಾಗೀಯ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿಸಲಾಗುವ 04 ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳಿಗೆ ಸೃಜಿಸಲಾದ ಹುದ್ದೆಗಳು** | | | |
|---|---|---|---|
| **ಕ್ರಮ ಸಂ.** | **ಹುದ್ದೆ ಮತ್ತು ವೇತನ ಶ್ರೇಣಿ** | **ಹುದ್ದೆಗಳ ಸಂಖ್ಯೆ** | |
| | | **ಪ್ರತಿ ತರಬೇತಿ ಕೇಂದ್ರಕ್ಕೆ** | **04 ತರಬೇತಿ ಕೇಂದ್ರಗಳಿಗೆ** |
| 1 | ಪ್ರಾಂಶುಪಾಲರು (ರೂ.28100-50100) | 01 | 04 |
| 2 | ಪ್ರಥಮ ದರ್ಜೆ ಸಹಾಯಕರು (ರೂ.14550-26700) | 01 | 04 |
| | **ಒಟ್ಟು** | | **08** |

| **ಆ) ರಾಜ್ಯದ ಎಲ್ಲಾ 30 ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಗಳಿಗೆ ಸೃಜಿಸಲಾದ ಹುದ್ದೆಗಳು** | | | |
|---|---|---|---|
| **ಕ್ರ ಸಂಖ್ಯೆ** | **ಹುದ್ದೆ ಮತ್ತು ವೇತನ ಶ್ರೇಣಿ** | **ಹುದ್ದೆಗಳ ಸಂಖ್ಯೆ** | |
| | | **ಪ್ರತಿ ಕಛೇರಿಗೆ** | **ಒಟ್ಟು 30 ಕಛೇರಿಗಳಿಗೆ** |
| 1 | ಪತ್ರಾಂಕಿತ ವ್ಯವಸ್ಥಾಪಕರು (ರೂ.22800-43200) | 01 | 30 |
| 2 | ಲೆಕ್ಕ ಅಧೀಕ್ಷಕರು (ರೂ.21600-40050) | 01 | 30 |
| 3 | ಪ್ರಥಮ ದರ್ಜೆ ಸಹಾಯಕರು (ರೂ.14550-26700) | 01 | 30 |
| 4 | ದ್ವಿತೀಯ ದರ್ಜೆ ಸಹಾಯಕರು (ರೂ.11600-21000) | 01 | 30 |
| | **ಒಟ್ಟು** | | **120** |

(ಎನ್.ಆರ್.ಎರೆಕುಪ್ಪಿ)
ಸರ್ಕಾರದ ಅಧೀನ ಕಾರ್ಯದರ್ಶಿ-1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 412 ಬಿಇಟಿ 2013, ದಿನಾಂಕ:27.05.2015 ಕ್ಕೆ ಅನುಬಂಧ-3**

| ಹೊಸದಾಗಿ ಸ್ಥಾಪಿಸಲಾಗುವ ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಛೇರಿಗಳಿಗೆ ಸೃಜಿಸಲಾದ ಹುದ್ದೆಗಳು | | | |
|---|---|---|---|
| ಕ್ರಮ ಸಂ. | ಹುದ್ದೆ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | |
| | | ಪ್ರತಿ ಕಛೇರಿಗೆ | ಒಟ್ಟು |
| 1 | ತಾಲ್ಲೂಕು ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ (ರೂ.22800-43200) | 01 | 177 |
| 2 | ಪ್ರಥಮ ದರ್ಜೆ ಸಹಾಯಕರು (ರೂ.14550-26700) | 01 | 177 |
| 3 | ದ್ವಿತೀಯ ದರ್ಜೆ ಸಹಾಯಕರು (ರೂ.11600-21000) | 01 | 177 |
| 4 | ಡೇಟಾ ಎಂಟ್ರಿ ಆಪರೇಟರ್ ಗ್ರೇಡ್-2 (ರೂ.11600-21000) | 01 | 177 |
| | ಒಟ್ಟು | | 708 |

ಎನ್.ಆರ್.ಎರೆಕುಪ್ಪಿ
ಸರ್ಕಾರದ ಅಧೀನ ಕಾರ್ಯದರ್ಶಿ-1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 412 ಬಿಇಟಿ 2013, ದಿನಾಂಕ:27.05.2015 ಕ್ಕೆ ಅನುಬಂಧ-4**

ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ 2015-16ನೇ ಸಾಲಿನಲ್ಲಿ ಪ್ರಥಮ ದರ್ಜೆ ಸಹಾಯಕರು ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಲಾಗಿರುವ ಕಛೇರಿವಾರು ಹುದ್ದೆಗಳು.

ಅ) ಇಲಾಖಾ ಆಯುಕ್ತರ ಕಛೇರಿ ಮತ್ತು ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳಿಗೆ

| ಕ್ರ. ಸಂ. | ಕಛೇರಿಗಳು | 2015-16 | | 2016-17 | |
|---|---|---|---|---|---|
| | | ಪ್ರಥಮ ದರ್ಜೆ ಸಹಾಯಕರು | ದ್ವಿತೀಯ ದರ್ಜೆ ಸಹಾಯಕರು | ಪ್ರಥಮ ದರ್ಜೆ ಸಹಾಯಕರು | ದ್ವಿತೀಯ ದರ್ಜೆ ಸಹಾಯಕರು |
| (i) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಆಯುಕ್ತರ ಕಛೇರಿ | 01 | -- | 05 | -- |
| (ii) | ವಿಭಾಗೀಯ ಮಟ್ಟದಲ್ಲಿ ಸ್ಥಾಪಿಸಲಾಗುವ 04 ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳಿಗೆ. | 04 | -- | -- | -- |

ಆ) ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಛೇರಿಗಳಿಗೆ

| ಕ್ರ. ಸಂ. | ಜಿಲ್ಲೆಗಳು | 2015-16 | | 2016-17 | |
|---|---|---|---|---|---|
| | | ಪ್ರಥಮ ದರ್ಜೆ ಸಹಾಯಕರು | ದ್ವಿತೀಯ ದರ್ಜೆ ಸಹಾಯಕರು | ಪ್ರಥಮ ದರ್ಜೆ ಸಹಾಯಕರು. | ದ್ವಿತೀಯ ದರ್ಜೆ ಸಹಾಯಕರು |
| 1 | ಬೆಂಗಳೂರು (ನಗರ) | - | 01 | 01 | - |
| 2 | ಬೆಂಗಳೂರು (ಗ್ರಾ) | 01 | - | - | 01 |
| 3 | ಬಳ್ಳಾರಿ | 01 | - | - | 01 |
| 4 | ಬೆಳಗಾವಿ | 01 | - | - | 01 |
| 5 | ಬೀದರ್ | - | 01 | 01 | - |
| 6 | ವಿಜಯಪುರ | - | 01 | 01 | - |
| 7 | ಬಾಗಲಕೋಟೆ | 01 | - | - | 01 |
| 8 | ಚಾಮರಾಜನಗರ | - | 01 | 01 | - |
| 9 | ಚಿಕ್ಕಬಳ್ಳಾಪುರ | 01 | - | - | 01 |
| 10 | ಚಿಕ್ಕಮಗಳೂರು | - | 01 | 01 | - |
| 11 | ಚಿತ್ರದುರ್ಗ | - | 01 | 01 | - |
| 12 | ದಕ್ಷಿಣ ಕನ್ನಡ | - | 01 | 01 | - |
| 13 | ದಾವಣಗೆರೆ | - | 01 | 01 | - |

| ಕ್ರ. ಸಂ. | ಜಿಲ್ಲೆಗಳು | 2015-16 | | 2016-17 | |
|---|---|---|---|---|---|
| | | ಪ್ರಥಮ ದರ್ಜೆ ಸಹಾಯಕರು | ದ್ವಿತೀಯ ದರ್ಜೆ ಸಹಾಯಕರು | ಪ್ರಥಮ ದರ್ಜೆ ಸಹಾಯಕರು. | ದ್ವಿತೀಯ ದರ್ಜೆ ಸಹಾಯಕರು |
| 14 | ಧಾರವಾಡ | 01 | - | - | 01 |
| 15 | ಗದಗ | - | 01 | 01 | - |
| 16 | ಕಲಬುರಗಿ | 01 | - | - | 01 |
| 17 | ಹಾಸನ | 01 | - | - | 01 |
| 18 | ಹಾವೇರಿ | - | 01 | 01 | - |
| 19 | ಕೋಲಾರ | - | 01 | 01 | - |
| 20 | ಕೊಪ್ಪಳ | - | 01 | 01 | - |
| 21 | ಮಡಿಕೇರಿ | - | 01 | 01 | - |
| 22 | ಮಂಡ್ಯ | 01 | - | - | 01 |
| 23 | ಮೈಸೂರು | 01 | - | - | 01 |
| 24 | ರಾಯಚೂರು | 01 | - | - | 01 |
| 25 | ರಾಮನಗರ | 01 | - | - | 01 |
| 26 | ಶಿವಮೊಗ್ಗ | - | 01 | 01 | - |
| 27 | ತುಮಕೂರು | 01 | - | - | 01 |
| 28 | ಉಡುಪಿ | - | 01 | 01 | - |
| 29 | ಉತ್ತರ ಕನ್ನಡ | 01 | - | - | 01 |
| 30 | ಯಾದಗಿರಿ | 01 | - | - | 01 |
| | ಒಟ್ಟು | 15 | 15 | 15 | 15 |

ಎನ್.ಆರ್.ಎರೆಕುಪ್ಪಿ
ಸರ್ಕಾರದ ಅಧೀನ ಕಾರ್ಯದರ್ಶಿ-1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ:ಹಿಂವಕ 412 ಬಿಇಟಿ 2013, ದಿನಾಂಕ:27.05.2015 ಕ್ಕೆ ಅನುಬಂಧ-5**

2015-16 ನೇ ಹಾಗೂ 2016-17 ನೇ ಸಾಲಿನಲ್ಲಿ ಹೊಸದಾಗಿ ಸ್ಥಾಪಿಸಲಾಗುವ ತಾಲೂಕು ಹಿಂದುಳಿದ ವರ್ಗಗಳ ಕಛೇರಿಗಳಿಗೆ ಸೃಜಿಸಲಾದ ಪ್ರ.ದ.ಸ. ಹಾಗೂ ದ್ವಿ.ದ.ಸ. ಹುದ್ದೆಗಳನ್ನು ಭರ್ತಿ ಮಾಡಲು ಅನುಮತಿಸಲಾದ ತಾಲ್ಲೂಕುವಾರು ಹುದ್ದೆಗಳು.

| ಕ್ರ.ಸಂ. | ಜಿಲ್ಲೆಯ ಹೆಸರು | ಕ್ರ.ಸಂ. | ತಾಲ್ಲೂಕು | 2015-16 | | 2016-17 | |
|---|---|---|---|---|---|---|---|
| | | | | ಪ್ರ.ದ.ಸ. | ದ್ವಿ.ದ.ಸ. | ಪ್ರ.ದ.ಸ. | ದ್ವಿ.ದ.ಸ. |
| 1 | **ಬಾಗಲಕೋಟೆ ಜಿಲ್ಲೆ** | 1 | ಬಾದಾಮಿ | - | 1 | 1 | - |
| | | 2 | ಬಾಗಲಕೋಟೆ | 1 | - | - | 1 |
| | | 3 | ಬೀಳಗಿ | 1 | - | - | 1 |
| | | 4 | ಹುನಗುಂದ | - | 1 | 1 | - |
| | | 5 | ಜಮಖಂಡಿ | 1 | - | - | 1 |
| | | 6 | ಮುಧೋಳ | 1 | - | - | 1 |
| | | | **ಒಟ್ಟು** | **4** | **2** | **2** | **4** |
| 2 | **ಬೆಂಗಳೂರು ಗ್ರಾಮಾಂತರ ಜಿಲ್ಲೆ** | 7 | ದೇವನಹಳ್ಳಿ | 1 | - | - | 1 |
| | | 8 | ದೊಡ್ಡಬಳ್ಳಾಪುರ | - | 1 | 1 | - |
| | | 9 | ಹೊಸಕೋಟೆ | - | 1 | 1 | - |
| | | 10 | ನೆಲಮಂಗಲ | 1 | - | - | 1 |
| | | | **ಒಟ್ಟು** | **2** | **2** | **2** | **2** |

| ಕ್ರ.ಸಂ. | ಜಿಲ್ಲೆಯ ಹೆಸರು | ಕ್ರ.ಸಂ. | ತಾಲ್ಲೂಕು | 2015-16 | | 2016-17 | |
|---|---|---|---|---|---|---|---|
| | | | | ಪ್ರ.ದ.ಸ. | ದ್ವಿ.ದ.ಸ. | ಪ್ರ.ದ.ಸ. | ದ್ವಿ.ದ.ಸ. |
| 3 | **ಬೆಂಗಳೂರು ನಗರ ಜಿಲ್ಲೆ.** | 11 | ಅನೇಕಲ್ | 1 | – | – | 1 |
| | | 12 | ಬೆಂಗಳೂರು ಉತ್ತರ | 1 | – | – | 1 |
| | | 13 | ಬೆಂಗಳೂರು ದಕ್ಷಿಣ | – | 1 | 1 | – |
| | | 14 | ಬೆಂಗಳೂರು ಪೂರ್ವ | 1 | – | – | 1 |
| | | | **ಒಟ್ಟು** | **3** | **1** | **1** | **3** |
| 4 | **ಬೆಳಗಾವಿ ಜಿಲ್ಲೆ** | 15 | ಅಥಣಿ | 1 | – | – | 1 |
| | | 16 | ಬೈಲಹೊಂಗಲ | – | 1 | 1 | – |
| | | 17 | ಬೆಳಗಾವಿ | 1 | – | – | 1 |
| | | 18 | ಚಿಕ್ಕೋಡಿ | 1 | – | – | 1 |
| | | 19 | ಗೋಕಾಕ್ | – | 1 | 1 | – |
| | | 20 | ಹುಕ್ಕೇರಿ | – | 1 | 1 | – |
| | | 21 | ಖಾನಾಪುರ | 1 | – | – | 1 |
| | | 22 | ರಾಮದುರ್ಗ | – | 1 | 1 | – |
| | | 23 | ರಾಯಭಾಗ್ | 1 | – | – | 1 |
| | | 24 | ಸವದತ್ತಿ | – | 1 | 1 | – |
| | | 25 | ಕಿತ್ತೂರು (ಹೊಸ) | 1 | – | – | 1 |
| | | | **ಒಟ್ಟು** | **6** | **5** | **5** | **6** |
| 5 | **ಬಳ್ಳಾರಿ ಜಿಲ್ಲೆ** | 26 | ಬಳ್ಳಾರಿ | 1 | – | – | 1 |
| | | 27 | ಹೂವಿನ ಹಡಗಲಿ | 1 | – | – | 1 |
| | | 28 | ಹಗರಿಬೊಮ್ಮನಹಳ್ಳಿ | – | 1 | 1 | – |
| | | 29 | ಹೊಸಪೇಟೆ | 1 | – | – | 1 |
| | | 30 | ಕೂಡ್ಲಗಿ | – | 1 | 1 | – |
| | | 31 | ಸಂಡೂರು | 1 | – | – | 1 |
| | | 32 | ಸಿರಗುಪ್ಪ | – | 1 | 1 | – |
| | | | **ಒಟ್ಟು** | **4** | **3** | **3** | **4** |
| 6 | **ಬೀದರ್ ಜಿಲ್ಲೆ** | 33 | ಔರಾದ್ | – | 1 | 1 | – |
| | | 34 | ಬಸವ ಕಲ್ಯಾಣ | – | 1 | 1 | – |
| | | 35 | ಬಾಲ್ಕಿ | 1 | – | – | 1 |
| | | 36 | ಬೀದರ್ | 1 | – | – | 1 |
| | | 37 | ಹುಮನಾಬಾದ್ | – | 1 | 1 | – |
| | | | **ಒಟ್ಟು** | **2** | **3** | **3** | **2** |
| 7 | **ವಿಜಯಪುರ ಜಿಲ್ಲೆ** | 38 | ಬಸವನ ಬಾಗೇವಾಡಿ | 1 | – | – | 1 |
| | | 39 | ವಿಜಯಪುರ | 1 | – | – | 1 |
| | | 40 | ಇಂಡಿ | – | 1 | 1 | – |
| | | 41 | ಮುದ್ದೇಬಿಹಾಳ | 1 | – | – | 1 |
| | | 42 | ಸಿಂಧಗಿ | – | 1 | 1 | – |
| | | | **ಒಟ್ಟು** | **3** | **2** | **2** | **3** |

| ಕ್ರ.ಸಂ. | ಜಿಲ್ಲೆಯ ಹೆಸರು | ಕ್ರ.ಸಂ. | ತಾಲ್ಲೂಕು | 2015-16 | | 2016-17 | |
|---|---|---|---|---|---|---|---|
| | | | | ಪ್ರ.ದ.ಸ. | ದ್ವಿ.ದ.ಸ. | ಪ್ರ.ದ.ಸ. | ದ್ವಿ.ದ.ಸ. |
| 8 | **ಚಾಮರಾಜನಗರ ಜಿಲ್ಲೆ** | 43 | ಚಾಮರಾಜನಗರ | 1 | – | – | 1 |
| | | 44 | ಗುಂಡ್ಲುಪೇಟೆ | 1 | – | – | 1 |
| | | 45 | ಕೊಳ್ಳೇಗಾಲ | – | 1 | 1 | – |
| | | 46 | ಯಳಂದೂರು | – | 1 | 1 | – |
| | | | **ಒಟ್ಟು** | **2** | **2** | **2** | **2** |
| 9 | **ಚಿಕ್ಕಬಳ್ಳಾಪುರ ಜಿಲ್ಲೆ** | 47 | ಬಾಗೇಪಲ್ಲಿ | – | 1 | 1 | – |
| | | 48 | ಚಿಕ್ಕಬಳ್ಳಾಪುರ | 1 | – | – | 1 |
| | | 49 | ಚಿಂತಾಮಣಿ | – | 1 | 1 | – |
| | | 50 | ಗೌರಿಬಿದನೂರು | – | 1 | 1 | – |
| | | 51 | ಗುಡಿಬಂಡೆ | – | 1 | 1 | – |
| | | 52 | ಶಿಡ್ಲಘಟ್ಟ | 1 | – | – | 1 |
| | | | **ಒಟ್ಟು** | **2** | **4** | **4** | **2** |
| 10 | **ಚಿಕ್ಕಮಗಳೂರು ಜಿಲ್ಲೆ** | 53 | ಚಿಕ್ಕಮಗಳೂರು | 1 | – | – | 1 |
| | | 54 | ಕಡೂರು | – | 1 | 1 | – |
| | | 55 | ಕೊಪ್ಪ | – | 1 | 1 | – |
| | | 56 | ಮೂಡಿಗೆರೆ | 1 | – | – | 1 |
| | | 57 | ನರಸಿಂಹರಾಜಪುರ | – | 1 | 1 | – |
| | | 58 | ಶೃಂಗೇರಿ | 1 | – | – | 1 |
| | | 59 | ತರೀಕೆರೆ | – | 1 | 1 | – |
| | | | **ಒಟ್ಟು** | **3** | **4** | **4** | **3** |
| 11 | **ಚಿತ್ರದುರ್ಗ ಜಿಲ್ಲೆ** | 60 | ಚಳ್ಳಕೆರೆ | – | 1 | 1 | – |
| | | 61 | ಚಿತ್ರದುರ್ಗ | 1 | – | – | 1 |
| | | 62 | ಹಿರಿಯೂರು | 1 | – | – | 1 |
| | | 63 | ಹೊಳಲ್ಕೆರೆ | 1 | – | – | 1 |
| | | 64 | ಹೊಸದುರ್ಗ | – | 1 | 1 | – |
| | | 65 | ಮೊಳಕಾಲ್ಮೂರು | 1 | – | – | 1 |
| | | | **ಒಟ್ಟು** | **4** | **2** | **2** | **4** |
| 12 | **ದಕ್ಷಿಣ ಕನ್ನಡ ಜಿಲ್ಲೆ** | 66 | ಬಂಟ್ವಾಳ | 1 | – | – | 1 |
| | | 67 | ಬೆಳ್ತಂಗಡಿ | – | 1 | 1 | – |
| | | 68 | ಮಂಗಳೂರು | 1 | – | – | 1 |
| | | 69 | ಪುತ್ತೂರು | – | 1 | 1 | – |
| | | 70 | ಸುಳ್ಯ | – | 1 | 1 | – |
| | | | **ಒಟ್ಟು** | **2** | **3** | **3** | **2** |
| 13 | **ದಾವಣಗೆರೆ ಜಿಲ್ಲೆ** | 71 | ಚನ್ನಗಿರಿ | – | 1 | 1 | – |
| | | 72 | ದಾವಣಗೆರೆ | 1 | – | – | 1 |
| | | 73 | ಹರಪನಹಳ್ಳಿ | – | 1 | 1 | – |
| | | 74 | ಹರಿಹರ | 1 | – | – | 1 |
| | | 75 | ಹೊನ್ನಾಳಿ | 1 | – | – | 1 |
| | | 76 | ಜಗಳೂರು | 1 | – | – | 1 |
| | | | **ಒಟ್ಟು** | **4** | **2** | **2** | **4** |

| ಕ್ರ.ಸಂ. | ಜಿಲ್ಲೆಯ ಹೆಸರು | ಕ್ರ.ಸಂ. | ತಾಲ್ಲೂಕು | 2015-16 | | 2016-17 | |
|---|---|---|---|---|---|---|---|
| | | | | ಪ್ರ.ದ.ಸ. | ದ್ವಿ.ದ.ಸ. | ಪ್ರ.ದ.ಸ. | ದ್ವಿ.ದ.ಸ. |
| 14 | **ಧಾರವಾಡ ಜಿಲ್ಲೆ** | 77 | ಧಾರವಾಡ | 1 | – | – | 1 |
| | | 78 | ಹುಬ್ಬಳ್ಳಿ | – | 1 | 1 | – |
| | | 79 | ಕಲಘಟಗಿ | 1 | – | – | 1 |
| | | 80 | ಕುಂದಗೋಳ | – | 1 | 1 | – |
| | | 81 | ನವಲಗುಂದ | 1 | – | – | 1 |
| | | | **ಒಟ್ಟು** | **3** | **2** | **2** | **3** |
| 15 | **ಗದಗ ಜಿಲ್ಲೆ** | 82 | ಗದಗ | 1 | – | – | 1 |
| | | 83 | ಮುಂಡರಗಿ | – | 1 | 1 | – |
| | | 84 | ನರಗುಂದ | 1 | – | – | 1 |
| | | 85 | ರೋಣ | – | 1 | 1 | – |
| | | 86 | ಶಿರಹಟ್ಟಿ | 1 | – | – | 1 |
| | | | **ಒಟ್ಟು** | **3** | **2** | **2** | **3** |
| 16 | **ಕಲಬುರಗಿ ಜಿಲ್ಲೆ** | 87 | ಅಫ್‌ಜಲ್‌ಪುರ | – | 1 | 1 | – |
| | | 88 | ಆಳಂದ | – | 1 | 1 | – |
| | | 89 | ಚಿಂಚೋಳಿ | 1 | – | – | 1 |
| | | 90 | ಚಿತ್ತಾಪುರ | 1 | – | – | 1 |
| | | 91 | ಕಲಬುರಗಿ | 1 | – | – | 1 |
| | | 92 | ಜೇವರ್ಗಿ | 1 | – | – | 1 |
| | | 93 | ಸೇಡಂ | – | 1 | 1 | – |
| | | | **ಒಟ್ಟು** | **4** | **3** | **3** | **4** |
| 17 | **ಹಾಸನ ಜಿಲ್ಲೆ** | 94 | ಆಲೂರು | – | 1 | 1 | – |
| | | 95 | ಅರಕಲಗೂಡು | – | 1 | 1 | – |
| | | 96 | ಅರಸೀಕೆರೆ | 1 | – | – | 1 |
| | | 97 | ಬೇಲೂರು | – | 1 | 1 | – |
| | | 98 | ಚನ್ನರಾಯಪಟ್ಟಣ | 1 | – | – | 1 |
| | | 99 | ಹಾಸನ | 1 | – | – | 1 |
| | | 100 | ಹೊಳೇನರಸೀಪುರ | – | 1 | 1 | – |
| | | 101 | ಸಕಲೇಶಪುರ | – | 1 | 1 | – |
| | | | **ಒಟ್ಟು** | **3** | **5** | **5** | **3** |
| 18 | **ಹಾವೇರಿ ಜಿಲ್ಲೆ** | 102 | ಬ್ಯಾಡಗಿ | – | 1 | 1 | – |
| | | 103 | ಹಾನಗಲ್ | – | 1 | 1 | – |
| | | 104 | ಹಾವೇರಿ | 1 | – | – | 1 |
| | | 105 | ಹಿರೇಕೆರೂರು | 1 | – | – | 1 |
| | | 106 | ರಾಣಿಬೆನ್ನೂರು | 1 | – | – | 1 |
| | | 107 | ಸವಣೂರು | – | 1 | 1 | – |
| | | 108 | ಶಿಗ್ಗಾಂವ | – | 1 | 1 | – |
| | | | **ಒಟ್ಟು** | **3** | **4** | **4** | **3** |
| 19 | **ಕೋಲಾರ ಜಿಲ್ಲೆ** | 109 | ಬಂಗಾರಪೇಟೆ | – | 1 | 1 | – |
| | | 110 | ಕೋಲಾರ | 1 | – | – | 1 |
| | | 111 | ಮಾಲೂರು | – | 1 | 1 | – |

| ಕ್ರ.ಸಂ. | ಜಿಲ್ಲೆಯ ಹೆಸರು | ಕ್ರ.ಸಂ. | ತಾಲ್ಲೂಕು | 2015-16 | | 2016-17 | |
|---|---|---|---|---|---|---|---|
| | | | | ಪ್ರ.ದ.ಸ. | ದ್ವಿ.ದ.ಸ. | ಪ್ರ.ದ.ಸ. | ದ್ವಿ.ದ.ಸ. |
| | | 112 | ಮುಳುಬಾಗಿಲು | 1 | – | – | 1 |
| | | 113 | ಶ್ರೀನಿವಾಸಪುರ | 1 | – | – | 1 |
| | | | **ಒಟ್ಟು** | **3** | **2** | **2** | **3** |
| 20 | **ಕೊಪ್ಪಳ ಜಿಲ್ಲೆ** | 114 | ಗಂಗಾವತಿ | – | 1 | 1 | – |
| | | 115 | ಕೊಪ್ಪಳ | 1 | – | – | 1 |
| | | 116 | ಕುಷ್ಠಗಿ | 1 | – | – | 1 |
| | | 117 | ಯಲಬುರ್ಗಾ | – | 1 | 1 | – |
| | | | **ಒಟ್ಟು** | **2** | **2** | **2** | **2** |
| 21 | **ಕೊಡಗು ಜಿಲ್ಲೆ** | 118 | ಮಡಿಕೇರಿ | 1 | – | – | 1 |
| | | 119 | ಸೋಮವಾರಪೇಟೆ | – | 1 | 1 | – |
| | | 120 | ವಿರಾಜಪೇಟೆ | – | 1 | 1 | – |
| | | | **ಒಟ್ಟು** | **1** | **2** | **2** | **1** |
| 22 | **ಮಂಡ್ಯ ಜಿಲ್ಲೆ** | 121 | ಕೆ.ಆರ್.ಪೇಟೆ | – | 1 | 1 | – |
| | | 122 | ಮದ್ದೂರು | – | 1 | 1 | – |
| | | 123 | ಮಳವಳ್ಳಿ | 1 | – | – | 1 |
| | | 124 | ಮಂಡ್ಯ | 1 | – | – | 1 |
| | | 125 | ನಾಗಮಂಗಲ | 1 | – | – | 1 |
| | | 126 | ಪಾಂಡವಪುರ | 1 | – | – | 1 |
| | | 127 | ಶ್ರೀರಂಗಪಟ್ಟಣ | – | 1 | 1 | – |
| | | | **ಒಟ್ಟು** | **4** | **3** | **3** | **4** |
| 23 | **ಮೈಸೂರು ಜಿಲ್ಲೆ** | 128 | ಹೆಚ್.ಡಿ.ಕೋಟೆ | 1 | – | – | 1 |
| | | 129 | ಹುಣಸೂರು | – | 1 | 1 | – |
| | | 130 | ಕೆ.ಆರ್.ನಗರ | – | 1 | 1 | – |
| | | 131 | ಮೈಸೂರು | 1 | – | – | 1 |
| | | 132 | ನಂಜನಗೂಡು | 1 | – | – | 1 |
| | | 133 | ಪಿರಿಯಾಪಟ್ಟಣ | – | 1 | 1 | – |
| | | 134 | ಟಿ.ನರಸೀಪುರ | – | 1 | 1 | – |
| | | | **ಒಟ್ಟು** | **3** | **4** | **4** | **3** |
| 24 | **ರಾಯಚೂರು ಜಿಲ್ಲೆ** | 135 | ದೇವದುರ್ಗ | – | 1 | 1 | – |
| | | 136 | ಲಿಂಗಸಗೂರು | 1 | – | – | 1 |
| | | 137 | ಮಾನ್ವಿ | 1 | – | – | 1 |
| | | 138 | ರಾಯಚೂರು | – | 1 | 1 | – |
| | | 139 | ಸಿಂಧನೂರು | – | 1 | 1 | – |
| | | | **ಒಟ್ಟು** | **2** | **3** | **3** | **2** |
| 25 | **ರಾಮನಗರ ಜಿಲ್ಲೆ** | 140 | ಚನ್ನಪಟ್ಟಣ | – | 1 | 1 | – |
| | | 141 | ಕನಕಪುರ | 1 | – | – | 1 |
| | | 142 | ಮಾಗಡಿ | – | 1 | 1 | – |
| | | 143 | ರಾಮನಗರ | 1 | – | – | 1 |
| | | | **ಒಟ್ಟು** | **2** | **2** | **2** | **2** |

| ಕ್ರ.ಸಂ. | ಜಿಲ್ಲೆಯ ಹೆಸರು | ಕ್ರ.ಸಂ. | ತಾಲ್ಲೂಕು | 2015-16 | | 2016-17 | |
|---|---|---|---|---|---|---|---|
| | | | | ಪ್ರ.ದ.ಸ. | ದ್ವಿ.ದ.ಸ. | ಪ್ರ.ದ.ಸ. | ದ್ವಿ.ದ.ಸ. |
| 26 | **ಶಿವಮೊಗ್ಗ ಜಿಲ್ಲೆ** | 144 | ಭದ್ರಾವತಿ | – | 1 | 1 | – |
| | | 145 | ಹೊಸನಗರ | – | 1 | 1 | – |
| | | 146 | ಸಾಗರ | 1 | – | – | 1 |
| | | 147 | ಶಿಕಾರಿಪುರ | – | 1 | 1 | – |
| | | 148 | ಶಿವಮೊಗ್ಗ | 1 | – | – | 1 |
| | | 149 | ಸೊರಬ | – | 1 | 1 | – |
| | | 150 | ತೀರ್ಥಹಳ್ಳಿ | 1 | – | – | 1 |
| | | | **ಒಟ್ಟು** | **3** | **4** | **4** | **3** |
| 27 | **ತುಮಕೂರು ಜಿಲ್ಲೆ** | 151 | ಚಿಕ್ಕನಾಯಕನಹಳ್ಳಿ | 1 | – | – | 1 |
| | | 152 | ಗುಬ್ಬಿ | – | 1 | 1 | – |
| | | 153 | ಕೊರಟಗೆರೆ | 1 | – | – | 1 |
| | | 154 | ಕುಣಿಗಲ್ | – | 1 | 1 | – |
| | | 155 | ಮಧುಗಿರಿ | 1 | – | – | 1 |
| | | 156 | ಪಾವಗಡ | – | 1 | 1 | – |
| | | 157 | ಶಿರಾ | 1 | – | – | 1 |
| | | 158 | ತಿಪಟೂರು | – | 1 | 1 | – |
| | | 159 | ತುಮಕೂರು | 1 | – | – | 1 |
| | | 160 | ತುರುವೇಕೆರೆ | – | 1 | 1 | – |
| | | | **ಒಟ್ಟು** | **5** | **5** | **5** | **5** |
| 28 | **ಉಡುಪಿ ಜಿಲ್ಲೆ** | 161 | ಕಾರ್ಕಳ | – | 1 | 1 | – |
| | | 162 | ಕುಂದಾಪುರ | – | 1 | 1 | – |
| | | 163 | ಉಡುಪಿ | 1 | – | – | 1 |
| | | | **ಒಟ್ಟು** | **1** | **2** | **2** | **1** |
| 29 | **ಉತ್ತರ ಕನ್ನಡ ಜಿಲ್ಲೆ** | 164 | ಅಂಕೋಲಾ | – | 1 | 1 | – |
| | | 165 | ಭಟ್ಕಳ | – | 1 | 1 | – |
| | | 166 | ಹಳಿಯಾಳ | 1 | – | – | 1 |
| | | 167 | ಹೊನ್ನಾವರ | 1 | – | – | 1 |
| | | 168 | ಕಾರವಾರ | 1 | – | – | 1 |
| | | 169 | ಕುಮಟ | 1 | – | – | 1 |
| | | 170 | ಮುಂಡಗೋಡ | – | 1 | 1 | – |
| | | 171 | ಸಿದ್ದಾಪುರ | 1 | – | – | 1 |
| | | 172 | ಸಿರಸಿ | – | 1 | 1 | – |
| | | 173 | ಜೋಯಿಡಾ(ಸುಪ) | – | 1 | 1 | – |
| | | 174 | ಯಲ್ಲಾಪುರ | – | 1 | 1 | – |
| | | | **ಒಟ್ಟು** | **5** | **6** | **6** | **5** |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ.ಸಂ. | ಜಿಲ್ಲೆಯ ಹೆಸರು | ಕ್ರ.ಸಂ. | ತಾಲ್ಲೂಕು | 2015–16 | | 2016–17 | |
|---|---|---|---|---|---|---|---|
| | | | | ಪ್ರ.ದ.ಸ. | ದ್ವಿ.ದ.ಸ. | ಪ್ರ.ದ.ಸ. | ದ್ವಿ.ದ.ಸ. |
| ೩೦ | **ಯಾದಗಿರಿ ಜಿಲ್ಲೆ** | 175 | ಶಹಾಪೂರ | – | 1 | 1 | – |
| | | 176 | ಸುರಪುರ | – | 1 | 1 | – |
| | | 177 | ಯಾದಗಿರಿ | 1 | – | – | 1 |
| | | | **ಒಟ್ಟು** | 1 | 2 | 2 | 1 |

**ಎನ್.ಆರ್.ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR. 332**

## ಇಂಧನ ಸಚಿವಾಲಯ

**ವಿಷಯ** : ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳಲ್ಲಿ ಸಹಾಯಕ ಮಾರ್ಗದಾಳು ಹುದ್ದೆಗಳ ನೇಮಕಾತಿಗೆ ಮಹಿಳೆಯರಿಗೆ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ** : 1. ಕ.ವಿ.ಪ್ರ.ನಿ.ನಿ.ದ ಪತ್ರ ಸಂಖ್ಯೆ: ಕವಿಪ್ರನಿನಿ/ಬಿ16/3281/2014–15 ದಿನಾಂಕ: 15.10.2014.

2. ಸರ್ಕಾರದ ಆದೇಶ ಸಂಖ್ಯೆ: ಇಎನ್ 193 ಇಇಬಿ 2012 ದಿನಾಂಕ: 19.01.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಕೆ.ಪಿ.ಟಿ.ಸಿ.ಎಲ್., ಮತ್ತು ಇತರೆ ಐದು ಎಸ್ಕಾಂಗಳಲ್ಲಿ ಖಾಲಿ ಇರುವ ಕಿರಿಯ ಮಾರ್ಗದಾಳು ಮತ್ತು ಕಿರಿಯ ಸ್ಟೇಷನ್ ಪರಿಚಾರಕ ಹುದ್ದೆಗಳನ್ನು ಕೆ.ಇ.ಬಿ (ಆರ್ & ಪಿ) ರೆಗ್ಯೂಲೇಷನ್‌ಯನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಉದ್ದೇಶಿಸಿದ್ದು, ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 9 (1ಬಿ) ರನ್ವಯ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮಾಡುವ ನೇರ ನೇಮಕಾತಿಯಲ್ಲಿ ಮಹಿಳೆಯರಿಗೆ ಶೇ.30 ರಷ್ಟು ಸಮತಳ ಮೀಸಲಾತಿ ಕಲ್ಪಿಸಬೇಕಾಗುತ್ತದೆ. ಆದರೆ ಸದರಿ ಕಿರಿಯ ಮಾರ್ಗದಾಳು ಮತ್ತು ಕಿರಿಯ ಸ್ಟೇಷನ್ ಪರಿಚಾರಕ ಹುದ್ದೆಗಳ ಕಾರ್ಯ ವೈಖರಿಯು ಅತ್ಯಂತ ಕಠಿಣದಿಂದ ಕೂಡಿದ್ದು, ಅಂದರೆ ಆಯ್ಕೆಯಾದ ನೌಕರರು ಕಂಬಗಳನ್ನು ಹತ್ತುವುದು ಗುಂಡಿಗಳನ್ನು ತೋಡುವುದು ಭಾರವಾದ ಸಾಮಗ್ರಿಗಳನ್ನು ಹೊತ್ತೊಯ್ಯುವಂತಹ ಕೆಲಸ ನಿರ್ವಹಿಸಬೇಕಾಗಿರುತ್ತದೆ. ಇಂತಹ ಕೆಲಸವನ್ನು ನಿರ್ವಹಿಸಲು ಮಹಿಳೆಯರು ದೈಹಿಕ ಸಾಮರ್ಥ್ಯ ಹೊಂದಿರುವುದಿಲ್ಲ. ಅಲ್ಲದೆ ದೂರದ ಪ್ರದೇಶಗಳಾದ ಕಾಡು, ಬೆಟ್ಟಗಳಲ್ಲಿ ಪ್ರಯಾಣಿಸಿ ಪುರುಷ ಸಹೊದ್ಯೋಗಿಗಳೊಂದಿಗೆ ಮಹಿಳೆಯರು ಹಗಲಿರುಳು ಕೆಲಸ ಮಾಡುವ ಸಂದರ್ಭ ಒದಗಿಬರುತ್ತವೆ. ಇದು ಮಹಿಳಾ ಉದ್ಯೋಗಿಗಳ ರಕ್ಷಣೆಗೆ ಮಾರಕವಾಗುವ ಸಂಭವವಿರುತ್ತದೆ.

ಇದೇ ರೀತಿ ಈ ಹಿಂದೆ ಕೆ.ಪಿ.ಟಿ.ಸಿ.ಎಲ್ ಮತ್ತು ಎಸ್ಕಾಂಗಳಲ್ಲಿ ಖಾಲಿ ಇದ್ದ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ಹುದ್ದೆಗಳ ನೇರ ನೇಮಕಾತಿಗೆ ಸರ್ಕಾರವು ಮೇಲೆ ಓದಲಾದ (2)ರ ಆದೇಶದಲ್ಲಿ ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮ 1977 ರ ನಿಯಮ 9 (1ಬಿ) ಯ 3ನೇ ಪರಂತುಕದನ್ವಯ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ಹುದ್ದೆಗಳ ನೇರ ನೇಮಕಾತಿಯಲ್ಲಿ ಶೇ.30 ರಷ್ಟು ಮಹಿಳಾ ಮೀಸಲಾತಿಯಿಂದ ವಿನಾಯಿತಿ ನೀಡಿ ಆದೇಶಿಸಿರುತ್ತದೆ.

ಆದ್ದರಿಂದ ಸಹಾಯಕ ಮಾರ್ಗದಾಳು ಮತ್ತು ಸ್ಟೇಷನ್ ಪರಿಚಾರಕ ದರ್ಜೆ–2 ವೃಂದದ ಮತ್ತು ಕಿರಿಯ ಮಾರ್ಗದಾಳು ಮತ್ತು ಕಿರಿಯ ಸ್ಟೇಷನ್ ಪರಿಚಾರಕ ಹುದ್ದೆಗಳ ಕಾರ್ಯವೈಖರಿ/ ಕಾರ್ಯಚಟುವಟಿಕೆ ಒಂದೇ ರೀತಿಯದ್ದಾಗಿರುವುದರಿಂದ ಪ್ರಸ್ತುತ ಕೆ.ಪಿ.ಟಿ.ಸಿ.ಎಲ್ ಮತ್ತು ಎಸ್ಕಾಂಗಳಲ್ಲಿ ಖಾಲಿ ಇರುವ ಕಿರಿಯ ಮಾರ್ಗದಾಳು ಮತ್ತು ಕಿರಿಯ ಸ್ಟೇಷನ್ ಪರಿಚಾರಕ ಹುದ್ದೆಗಳ ನೇರ ನೇಮಕಾತಿಯಲ್ಲಿ ಮಹಿಳಾ ಮೀಸಲಾತಿಯಿಂದ ವಿನಾಯಿತಿ ನೀಡಬೇಕೆಂದು ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 119 ಇಇಬಿ 2015, ಬೆಂಗಳೂರು, ದಿನಾಂಕ: 23.05.2015**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಲ್ಲಾ ಎಸ್ಕಾಂಗಳಲ್ಲಿ ಖಾಲಿ ಇರುವ ನಿರ್ವಹಣಾ ವೃಂದಗಳಾದ ಕಿರಿಯ ಮಾರ್ಗದಾಳು ಮತ್ತು ಕಿರಿಯ ಸ್ಟೇಷನ್ ಪರಿಚಾರಕ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಲು ದೈಹಿಕ ಸಾಮರ್ಥ್ಯದ ಅಗತ್ಯವಿರುವುದನ್ನು ಮತ್ತು ಮಹಿಳೆಯರು ಅವೇಳೆಯಲ್ಲಿ ದೂರದ ಪ್ರದೇಶಗಳಲ್ಲಿ ಪುರುಷ ಸಹದ್ಯೋಗಿಗಳೊಂದಿಗೆ ಕೆಲಸ ನಿರ್ವಹಿಸುವುದು ಕಷ್ಟಸಾಧ್ಯವಾಗುವುದನ್ನು ಗಮನದಲ್ಲಿಟ್ಟಿಕೊಂಡು, ಈ ಹುದ್ದೆಗಳ ನೇರ ನೇಮಕಾತಿಯಲ್ಲಿ ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮ 1977 ರ ನಿಯಮ 9 (1ಬಿ) ಯ 3ನೇ ಪರಂತುಕದನ್ವಯ, ಮಹಿಳೆಯರಿಗೆ ಶೇ.30 ರಷ್ಟು ನೀಡುವ ಸಮತಳ ಮೀಸಲಾತಿಯಿಂದ ವಿನಾಯಿತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಸಿಬ್ಬಂಧಿ ಮತ್ತು ಆಡಳಿತ ಸುಧಾರಣೆ (ಸೇವಾ ನಿಯಮ–1), ಇಲಾಖೆಯು ಟಿಪ್ಪಣಿ ಸಂಖ್ಯೆ : ಸಿಆಸುಇ 26 ಸೇನಿಎ 2015 ದಿನಾಂಕ : 24.04.2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR. 336**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59